ಡಾ॥ ಎಂ.ಬಿ.ರಾಜಾಮಣಿ

# ಒಗ್ಗಟ್ಟಿನ ವರ್ತನೆಯ ಒಂದು ಸಾಮಾಜಿಕ ಉಲ್ಲೇಖ

(15ನೇ ಶತಮಾನದ ಒಂದು ಶಾಸನದ ಹಿನ್ನೆಲೆಯಲ್ಲಿ)

ಕರ್ನಾಟಕವು ಆರಂಭದಿಂದಲೂ ಒಂದು ಸಾಮಾಜಿಕ ಸಂಸ್ಕೃತಿಯ ಉತ್ತಮ ನೆಲೆಯಾಗಿದೆ. ಸಾಮಾಜಿಕ ಜೀವನದ ವೈವಿಧ್ಯತೆ ಮತ್ತು ಆಳ, ಸಾಮಾಜಿಕ ಆದರ್ಶ ಮತ್ತು ಸಾಮಾಜಿಕ ಮೌಲ್ಯಗಳ ಅರಿವು – ಇವುಗಳಲ್ಲಿ ಅವರ ಸಾಧನೆ, ಅದರಲ್ಲಿರುವ ತಾಳ್ಮೆ, ಸಹಿಷ್ಣುತೆ, ಸೇವೆ ಮತ್ತು ತ್ಯಾಗದ ಮನೋಭಾವ – ಈ ಎಲ್ಲವೂ ಗಣನೀಯವಾಗಿದೆ. ಅವರ ಸಾಮಾಜಿಕ ಜೀವನವೂ ಮುಖ್ಯವಾಗಿ ಧಾರ್ಮಿಕ ರೂಪ ಮತ್ತು ಧಾರ್ಮಿಕಸ್ಫೂರ್ತಿಯುಳ್ಳದ್ದಾಗಿದೆ. ಹೇಗೆಂದರೆ, ಅವರ ಎಲ್ಲ ಕಾರ್ಯಗಳ ಹಿಂದೆಯೂ ದೇವರನ್ನು ಸಂಪ್ರೀತಿಗೊಳಿಸುವ ಮತ್ತು ತಮ್ಮ ವೈಯುಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ಮಾಡುವ ಒಳ್ಳೆಯ ಕೃತಿಗಳಿಂದ ಪುಣ್ಯವನ್ನು ಸಂಪಾದಿಸುವ ಉದ್ದೇಶವಿದೆ. ಹೀಗೆ ಅವರ ಸಾಮಾಜಿಕ ಜೀವನವೂ ಒಂದು ಸಮಾಜೋಧಾರ್ಮಿಕ ಜೀವನಾವಾಗಿತ್ತು. ಇಂತಹ ಜೀವನದ ಮುಖ್ಯ ಲಕ್ಷಣವೆಂದರೆ, ಸಾಮುದಾಯಿಕ ಮತ್ತು ಸಹಕಾರಮಯ ಜೀವನ, ಧಾರ್ಮಿಕವಾದ ರೀತಿ ನೀತಿಗಳಿಂದ ನಿಯಂತ್ರಿಸಲ್ಪಟ್ಟ ಕೂಡು ಜವಾಬ್ದಾರಿ ಮತ್ತು 'ಒಟ್ಟು ಜೀವನ'. ಪ್ರತೀಯೊಂದು ಅಗ್ರಹಾರ ಮತ್ತು ಪ್ರತೀಯೊಂದು ಹಳ್ಳಿಯೇ ಒಂದೊಂದು ಚಿಕ್ಕ ಸಮುದಾಯವೆನಿಸಿದ್ದವು. ಇವು ಒಂದು ನಿರ್ದಿಷ್ಟ ಭೌಗೋಳಿಕ ಕ್ಷೇತ್ರವನ್ನು ಒಳಗೊಂಡಿತ್ತು. ಅದರೊಂದಿಗೆ, ಕೆಲಸವನ್ನು ಪರಿಣತೆ ಮತ್ತು ಪರಸ್ಪರ ಅವಲಂಬನೆಗಳಿಂದ ಕೂಡಿದ್ದಾಗಿ ವಿಭಾಗಿಸಿದ ಕಾರ್ಯ ವರ್ಗೀಕರಣವಿತ್ತು. ಮತ್ತು ಅವರ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸುವಂತೆ ಎಲ್ಲರಿಗೂ ಸಮಾನವಾದ ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಯಿತ್ತು. ಈ ಜನರಲ್ಲಿ ಕೂಡಾ ಒಗ್ಗಟ್ಟಿನ ಪ್ರಜ್ಞೆಯುಳ್ಳವರಾಗಿದ್ದು, ತಾವು ಒಂದು ಸಮುದಾಯಕ್ಕೆ ಸೇರಿದವರೆಂಬ ಭಾವನೆಯು ಇತ್ತು. ಆದ್ದರಿಂದ ಈ ಜನರು ಒಂದು ವ್ಯವಸ್ಥಿತ ರೀತಿಯಲ್ಲಿ ಒಟ್ಟಾಗಿ ಕಾರ್ಯತತ್ಪರರಾಗ ಬಲ್ಲವರಾಗಿದ್ದರು. ಈ ಲೇಖನವೂ ಈಅಂಶಗಳನ್ನು, ಒಂದು ೧೫ನೇ ಶತಮಾನದ ಶಾಸನವನ್ನು ಪರಿಶೀಲಿಸುವುದರೊಂದಿಗೆ ಸ್ಪಷ್ಟ ಪಡಿಸುತ್ತದೆ[1].

ಕ್ರಿ.ಶ. ೧೫ನೇ ಶತಮಾನದ ಲಿಪಿಯಲ್ಲಿರುವ ಈ ಶಾಸನವು ಮಿರ್ಲೆಯ ರಾಮದೇವ ದೇವಾಲಯದಲ್ಲಿ ನವರಂಗದ ವಿತಾನದಲ್ಲಿ ಇದೆ. ಈ ಶಾಸನದಲ್ಲಿರುವುದೇನೆಂದರೆ: ಉದ್ಭವ ಸರ್ವಜ್ಞಪುರ, ವಿದ್ಯಾನಿಧಿ ದಕ್ಷಿಣ ವಾರಣಾಸಿ ಎನಿಸಿ ಅಗ್ರಹಾರವಾಗಿದ್ದ ಹಂಪಾಪುರದ ಮಹಾಜನರಿಗೂ ಮತ್ತು ಹಳ್ಳಿಹಿರಿಯೂರಿನ ಗೌಡುಪ್ರಜೆಗಳಿಗೂ, ಅವರ ಹಳ್ಳಿಯಲ್ಲಿ ೮–೧೦ ಕಡೆ ಒಡೆದು ಹೋಗಿದ್ದ ಒಂದು ಕಟ್ಟೆಯ ದುರಸ್ತಿಗಾಗಿ ಹಣ ಸಂಗ್ರಹಿಸಲಾಗಲಿಲ್ಲ. ಆಗ, ಅವರೆಲ್ಲರೂ ಒಟ್ಟಾಗಿ ಸೇರಿ ಒಂದು ಮನೆ, ನಾಲ್ಕು ಸೀಮೆಯೊಳಗಿದ್ದ ಗದ್ದೆ ಮತ್ತು ಹೊಲವನ್ನು ಸಿಂಗೇರಿಯ ಪರಮಹಂಸ ಪರಿವ್ರಾಜಕಾಚಾರ್ಯ ನಾರಸಿಂಹ ಭಾರತಿ ಒಡೆಯರ ಶಿಷ್ಯರಾದ ಭಾರತೀಪುರದ ಚಿಕ್ಕದೀಕ್ಷಿತರಿಗೆ ಮಾರಿ ಹಣವನ್ನು ಸಂಗ್ರಹಿಸುವುದೆಂದು ನಿರ್ಧರಿಸಿದರು. ಶಾಸನ ದಲ್ಲಿರುವಂತೆ, ನಾಲ್ಕು ಸೀಮೆಯೊಳಗಿರುವ ಉತ್ತರದ ಬೀದಿಯ ಬ್ರಹ್ಮಪುರದಲ್ಲಿರುವ ಪೂರ್ವ–ಪಶ್ಚಿಮ ೧೨ ಕೈ ಉದ್ದದ ಮನೆಯನ್ನು ಮಾರುವುದೆಂದು ತೀರ್ಮಾನಿಸಲಾಯಿತು. ಈ ಮನೆಯು ಕೃಷ್ಣ ಭಟ್ಟರ ಮನೆಯಿಂದ ಪಶ್ಚಿಮಕ್ಕೂ, ಸೂರ್ಯ ವೀದಿ (ಬಹುಶ: ಪೂರ್ವ–ಪಶ್ಚಿಮವಾಗಿರುವ ಹಳ್ಳಿಯ ಮುಖ್ಯಬೀದಿ ಇರಬೇಕು) ಯಿಂದ ಉತ್ತರಕ್ಕೂ, ಅತಿರಾತ್ರೇಯಾಜಿ ದೀಕ್ಷಿತರ (ಮನೆ) ಯಿಂದ ಪೂರ್ವಕ್ಕು ಮತ್ತು ಶೂದ್ರ ಮನೆಗಳಿಂದ ದಕ್ಷಿಣಕ್ಕೂ ಇತ್ತು. ಈ ಮನೆಗೆ ಆಗ ಪ್ರಚಲಿತವಿದ್ದ ಬೆಲೆಗೆ ತಕ್ಕಂತೆ ಮಾರಾಟದ ಬೆಲೆ ೧೦ಹೊನ್ನು ಎಂದು ನಿಗದಿ ಪಡಿಸಲಾಯಿತು.

ಅಂತೆಯೇ, ಅವರು ವಿನಿಯೋಗ ಮಾಡಬೇಕಾಗಿದ್ದ ಗದ್ದೆಯು ಪಶ್ಚಿಮ ಮನೆಗಳಲ್ಲಿ (Quarters), ಪೂರ್ವ ಮನೆಗಳಲ್ಲಿರುವ ಸೋವಣ್ಣ ಮತ್ತು ಶ್ರೀಧರದೇವನ ತೋಟದಿಂದ ಪಶ್ಚಿಮಕ್ಕೂ, ಪಶ್ಚಿಮದ ಅಡ್ಡಕಟ್ಟೆಯ ಅರಣೆಯಿಂದ ಉತ್ತರಕ್ಕೂ, ಹರಿಭಟ್ಟನ ಗದ್ದೆಯಿಂದ ಪೂರ್ವಕ್ಕೂ ಮತ್ತು ವಿಜಯಾಪುರದ ಗಂಗಣ್ಣ

ಗದ್ದೆಯಿಂದ ದಕ್ಷಿಣಕ್ಕೂ ಇತ್ತು. ಸ್ಥಳೀಯ ಅಳತೆಯಂತೆ, ಖಂಡುಗ ಬೆಳೆಯಬಲ್ಲ ಭೂಮಿಗೆ ೧೦ ವರಹದಂತೆ ಇದರ ಮಾರಾಟದ ಬೆಲೆಯನ್ನು ೧೨೦ ವರಹ ಎಂದು ನಿಗದಿಪಡಿಸಲಾಯಿತು. ಪೂರ್ವಕ್ಕಿದ್ದ ೩೦೦ ಅಳತೆ ಅಥವಾ ೧೫೦ ಕಂಬ (poles)ವುಳ್ಳ ಹೊಲವನ್ನು ೧೦೦ ಅಳತೆಯನ್ನು ಹೊರತುಪಡಿಸಿ, ೧೦ ಹೊನ್ನಿಗೆ ಮಾರಾಟ ಮಾಡಲಾಯಿತು. ಒಟ್ಟಾರೆ ಗದ್ದೆ, ಹೊಲ ಮತ್ತು ಮನೆಯನ್ನು ಚಿಕ್ಕದೀಕ್ಷಿತನಿಗೆ ಮಾರಿದ್ದರಿಂದ ಮಹಾಜನ ಮತ್ತು ಗೌಡುಪ್ರಜೆಗಳಿಗೆ ೧೪೦ ಹೊನ್ನು ದೊರಕಿತು. ಈ ಬೆಲೆಯನ್ನು ಆ ಕಾಲದಲ್ಲಿದ್ದ ಚಾಲ್ತಿ ಬೆಲೆಗೆ ತಕ್ಕಂತೆ ಮಧ್ಯಸ್ಥಿಕೆಯವರಿಂದ ನಿಗದಿಪಡಿಸಲಾಗಿತ್ತು ಮತ್ತು ಈ ವ್ಯವಹಾರವನ್ನು ಎರಡೂ ಕಡೆಯವರು ಒಪ್ಪಿಕೊಂಡರು.

ಮಹಾಜನ ಮತ್ತು ಗೌಡುಪ್ರಜೆಗಳಿಬ್ಬರೂ ಈ ಹಣವನ್ನೂ ಕಾಲುವೆ ಮತ್ತು ಕಟ್ಟೆಗಾಗಿ ವಿನಿಯೋಗಿಸಿ ತಕ್ಕ ಪರಿಹಾರದ ಹಣವನ್ನೂ ನೀಡಿ ಮಿಕ್ಕದ್ದನ್ನು ಹಾಗೇ ಉಳಿಸಿಕೊಂಡರು. ಹೀಗೆ, ಮನೆ, ಗದ್ದೆ, ಹೊಲವನ್ನು ಚಿಕ್ಕ ದೀಕ್ಷಿತನಿಗೆ ಕೊಡುವ ಮೊದಲು ವಾಮನ ಮುದ್ರೆಯ ಕಲ್ಲನ್ನು ಅವುಗಳ ಸೀಮೆಯ ನಾಲ್ಕೂ ಕಡೆ ನೆಟ್ಟು ಅವುಗಳು ಇನ್ನು ಹಳ್ಳಿಯ ಸ್ವತ್ತಲ್ಲ, ಅದನ್ನು ಯಾರೂ ಅತಿಕ್ರಮಿಸಬಾರದೆಂದು ಸ್ಪಷ್ಟಪಡಿಸಿದರು. ಹಾಗೆ ನೋಡಿದರೆ ಆ ವಾಮನ ಮುದ್ರೆ ಕಲ್ಲುಗಳು ಅತಿಕ್ರಮ ಪ್ರವೇಶದ ಸೂಚಕವಲ್ಲ. ಅವರು ಗುರು ನಾರಸಿಂಹಭಾರತಿ ಪುಣ್ಯಾರ್ಥವಾಗಿ ಕಾವೇರಿ ನದಿಯ ತಟದಲ್ಲಿ ಬ್ರಾಹ್ಮಣ ಭೋಜನಕ್ಕಾಗಿ ಒಂದು ಛತ್ರವನ್ನು ಸ್ಥಾಪಿಸಿ, ಈ ಎಲ್ಲವನ್ನೂ ಉಪಯೋಗಿಸಿಕೊಳ್ಳಬೇಕೆಂದು ಚಿಕ್ಕದೀಕ್ಷಿತನನ್ನು ಪ್ರಾರ್ಥಿಸಿದರು. ಇದರಿಂದ ಬರುವ ಹೊರೆಯನ್ನು ಧರ್ಮಶಾಸ್ತ್ರದಂತೆ (? ತಾವೇ ಹೊರುವುದಾಗಿ ಚಿಕ್ಕದೀಕ್ಷಿತನಿಗೆ ಸ್ಪಷ್ಟಪಡಿಸಿದರು. ಚಿಕ್ಕದೀಕ್ಷಿತನಿಂದ, ನಿಗದಿತವಾದ ಮಾರಾಟದ ಬೆಲೆ ಬಂದ ನಂತರ, ದಾಖಲೆಯ ಪ್ರತಿಯಾಗಿ ಊರ ಮಧ್ಯದಲ್ಲಿದ್ದ ಲಕ್ಷ್ಮೀನಾಥದೇವರ ದೇವಾಲಯದ ಮುಂದೆ ಶಾಸನವನ್ನು ಹಾಕಿಸಿದರು. ಇದು ಮುಂದೆಯೂ ತಪ್ಪದೆ ನಡೆಯುವಂತೆ, ಅವರು ಸಾಲುಗಾವೆ ಮತ್ತು ಮಿರ್ಲೆಯ ಮಹಾಜನರು ಚಾಮಯದೇವ, ಮಹಾಬಲೇಶ್ವರ ದೇವರ ಬೆಟ್ಟದ (ಮೈಸೂರಿನ ಚಾಮುಂಡಿ ಬೆಟ್ಟದ ಮಹಾಬಲೇಶ್ವರ ತೀರ್ಥವಿರಬೇಕು) ಗಣಾಚಾರಿ (ಶೈವ ಅರ್ಚಕರ ಮುಖ್ಯಸ್ಥ), ಸಮಯಕುಮಾರ (ಧರ್ಮದ ಪುತ್ರ, ಸಾತಾನಿಗಳ ಸಮುದಾಯವನ್ನು ಸೂಚಿಸಲು ಬಳಸುವ ಪದ), ಕೋಟಿಗಳ ಮಹಾನಾಯಕ, ಎರಡೂ ಅಗ್ರಹಾರಗಳ ಮಹಾಜನರು ಮತ್ತು ಎರಡೂ ಧರ್ಮಗಳ ಅನುಯಾಯಿಗಳು – ಇವರುಗಳನ್ನು ಸಾಕ್ಷಿಗಳೆಂದು ಒಪ್ಪಿದರು. ಈ ಧರ್ಮವು ಮುಂದುವರಿಯುವಂತೆ ಅವರು ಇನ್ನೊಂದು ವ್ಯವಸ್ಥೆಯನ್ನೂ ಮಾಡಿದರು. ಇದೇ ಮಾರಾಟದ ವಿಷಯವಿರುವ ಇನ್ನೊಂದು ಶಾಸನವನ್ನು ಬರೆದು ಮಿರ್ಲೆಯ ನಾರಸಿಂಹದೇವರ ಮುಂದಿಟ್ಟು ಅದನ್ನು ಮೇಲೆ ಹೇಳಿದ ಸಾಕ್ಷಿಗಳ ನಿಯಂತ್ರಣದಲ್ಲಿ ಇಡಲಾಯಿತು.

ಈ ಮೇಲಿನ ವಿವರಗಳು ಕರ್ನಾಟಕ ಸಮಾಜದಲ್ಲಿದ್ದ ಸಹಜೀವನ, ಕೊಡುಜವಾಬ್ದಾರಿ ಗಳನ್ನೊಳಗೊಂಡ ಒಗ್ಗಟ್ಟಿನ ವರ್ತನೆಯ ಆರೋಗ್ಯಕರ ಪರಂಪರೆಯನ್ನು ಸ್ಪಷ್ಟಪಡಿಸುತ್ತದೆ. ಇದರಿಂದ, ಈ ವ್ಯವಹಾರದಲ್ಲಿ ಪ್ರಮುಖ ಪಾತ್ರವಹಿಸಿದ ಮಹಾಜನ ಮತ್ತು ಗೌಡುಪ್ರಜೆಗಳು ಆ ಸ್ಥಳದಲ್ಲಿ ಒಪ್ಪಿತವಾದ ನಾಯಕರಾಗಿದ್ದರೆಂದು ಹೇಳಬಹುದು. ಅವರು ಮಾರಾಟ ಮಾಡಿದ್ದು ಸ್ವಂತ ಆಸ್ತಿಯಲ್ಲ, ಸಮುದಾಯದ ಆಸ್ತಿ ಮತ್ತು ಸಂಬಂಧಿಸಿದ ಸ್ಥಳೀಯರು ಸಮುದಾಯದ ದೃಷ್ಟಿಯಿಂದ ಅದನ್ನು ವಿನಿಯೋಗ ಮಾಡಲು ಅವರಿಗೆ ಅಧಿಕೃತ ಮನ್ನಣೆಯನ್ನು ನೀಡಿದ್ದರು.

ಅವರೂ ಈ ಆಸ್ತಿಯನ್ನು ತಮ್ಮ ಸ್ವಂತಕ್ಕಾಗಿ ಮಾರಲಿಲ್ಲ, ಆ ಸ್ಥಳದ ಕಾಲುವೆ ಮತ್ತು ಕಟ್ಟೆಯ ದುರಸ್ತಿಗೆ ಬೇಕಾದ ಹಣವನ್ನು ಕೊಡಿಸಲೆಂದು ಸಮುದಾಯದ ಉಪಯೋಗಕ್ಕಾಗಿಯೇ ಮಾರಿದರು. ಇದರಲ್ಲಿ ರಹಸ್ಯ ವ್ಯವಹಾರಗಳಾವುವೂ ಇಲ್ಲ. ಎಲ್ಲವೂ ಮುಕ್ತವಾಗಿದ್ದು, ಎಲ್ಲರಿಗೂ ತಿಳಿಯುವಂತೆ ಊರಿನಮಧ್ಯದಲ್ಲಿ ಶಾಸನವನ್ನೂ ಹಾಕಿಸಲಾಗಿತ್ತು. ಮತ್ತು ಆ ಸ್ಥಳದ ಮತ್ತು ಸುತ್ತಮುತ್ತಲ ಊರಿನ ಮುಖ್ಯಸ್ಥರು ಮಧ್ಯಸ್ಥರು, ಸಾಕ್ಷಿಗಳು ಮುಂತಾಗಿ ಇದರಲ್ಲಿ ಪಾತ್ರವಹಿಸಿದ್ದರು. ಆ ಸ್ಥಳದ ನಾಯಕರೂ ಕೂಡಾ ಈ ಮಾರಾಟದಿಂದ ಬಂದ ಹಣವು ಆ ಊರಿಗಾಗೇ ಉಪಯೋಗಿಸಲ್ಪಡುವಂತೆ ವ್ಯವಸ್ಥೆ ಮಾಡಿದ್ದರು. ಅವರು ಚಿಕ್ಕದೀಕ್ಷಿತನಿಗೆ, ಮನೆಯನ್ನು ಛತ್ರವಾಗಿ ಮಾಡುವಂತೆಯೂ, ಹೊಲಗದ್ದೆಯಿಂದ ಬಂದ ಆದಾಯವನ್ನು ಆ ಛತ್ರದ ಬ್ರಾಹ್ಮಣ ಭೋಜನಕ್ಕೆ ವಿನಿಯೋಗಿಸುವಂತೆಯೂ ಪ್ರಾರ್ಥಿಸಿಕೊಂಡತು. ಹೀಗೆ ಅವರು ಸ್ಥಳದ ಆಸ್ತಿಯ ಮೇಲೆ ಆಸಕ್ತಿಯುಳ್ಳವರಾಗಿ

ದ್ದರು. ಅವರಲ್ಲಿ 'ಸ್ವಸಮುದಾಯ ವೃತ್ತಿ'ಯು ಅಧಿಕವಾಗಿ ಪ್ರವೃತ್ತವಾಗಿತ್ತು. ಅಲ್ಲದೆ, ಬ್ರಾಹ್ಮಣಭೋಜನ ನೀಡುವುದರಿಂದ ಬರುವ ಪುಣ್ಯದ ಮೇಲಿನ ಅವರ ನಂಬಿಕೆಯೂ ಈ ಸ್ಥಳದಲ್ಲಿ ಮುಖ್ಯವಾಗಿತ್ತು. ಇದನ್ನು ಧಾರ್ಮಿಕ-ಆರ್ಥಿಕ ವ್ಯವಹಾರವೆಂದೂ ಹೇಳಬಹುದು. ಇಲ್ಲಿ ಅರ್ಥವೂ ಧರ್ಮದ ಮೇಲೆ ಮತ್ತು ಧರ್ಮಕ್ಕೆ ಅನುಗುಣವಾಗಿದೆ. ಏಕೆಂದರೆ, ಆ ಸ್ಥಳದ ಲಕ್ಷ್ಮೀನಾಥ ದೇವರನ್ನು ಮತ್ತು ಮಿರ್ಲೆಯ ನಾರಸಿಂಹ ದೇವರನ್ನೂ ಇಲ್ಲಿ ಸಾಕ್ಷಿಗಳೆಂದು ಹೇಳಿದೆ. ಈಮಾರಾಟದ ಶಾಸನದ ಕಲ್ಲಿನ ಪ್ರತಿಯನ್ನು ಲಕ್ಷ್ಮೀನಾಥದೇವ ಮತ್ತು ಮಿರ್ಲೆಯ ನಾರಸಿಂಹದೇವರ ದೇವಾಲಯದ ಮುಂದೆಯೂ ಇಡಲಾಗಿದೆ. ಈ ಮಾರಾಟದ ಪ್ರತಿಯನ್ನು ಮಹಾಜನ ಮತ್ತು ಗೌಡ ಪ್ರಜೆಗಳು ಅವಿರೋಧವಾಗಿ ಮತ್ತು ಮನಃಪೂರ್ವಕವಾಗಿ ಧಾರಾಪೂರ್ವಕವಾಗಿ ಹೊನ್ನಿನೊಂದಿಗೆ ಚಿಕ್ಕದೀಕ್ಷಿತನಿಗೆ ಕೊಟ್ಟರು.

ಹೀಗೆ, ಇಲ್ಲಿ ಮಹಾಜನ, ಗೌಡ ಪ್ರಜೆಗಳು ಮತ್ತು ಸ್ಥಳೀಯರು ಸಮಾನ ಅವಶ್ಯಕತೆ ಮತ್ತು ಉಪಯೋಗಕ್ಕಾಗಿ ಒಟ್ಟು ಸಮುದಾಯದ ಜವಾಬ್ದಾರಿಯನ್ನು ಹಂಚಿಕೊಳ್ಳುವ, ಪರಿಸ್ಥಿತಿಗೆ ತಕ್ಕ 'ಒಗ್ಗಟ್ಟಿನ ಪ್ರತಿಕ್ರಿಯೆ'ಯುಳ್ಳ ವರ್ತನೆಯನ್ನು ತೋರಿಸಿದ್ದಾರೆ. 'ಒಗ್ಗಟ್ಟಿನ ವರ್ತನೆ'ಯನ್ನು ಆಹ್ವಾನಿಸುವ ಇಂಥ ಪರಿಸ್ಥಿತಿಯಲ್ಲಿ, ಧಾರ್ಮಿಕ ರೂಢಿಯು ಅವರ ವರ್ತನೆಯನ್ನು ನಿಯಂತ್ರಿಸಿದೆ. ಇಲ್ಲಿನ ಸ್ಥಳೀಯ ಜನರಿಗೆ, ಸ್ಥಳೀಯ ಮುಖ್ಯಸ್ಥರಾದ ಮಹಾಜನ ಮತ್ತು ಗೌಡ ಪ್ರಜೆಗಳಿಗೆ ಬೆಂಬಲ ನೀಡುವಂತಹ ಅಭಿಪ್ರಾಯವೂ, ಸ್ಥಳೀಯ ಗುಂಪು ಮತ್ತು ಮೌಲ್ಯಗಳೊಂದಿಗೆ ಅತೀವ ಸಂಬಂಧವೂ, ಇದ್ದುದನ್ನು ಇಲ್ಲಿ ಗುರುತಿಸಬಹುದು. ಹೀಗೆ, ಇದು ಪಾರಂಪರಿಕವಾದ ಮತ್ತು ಸಮುದಾಯಾಧಾರಿತ ಸಂಬಂಧದ ಅನೌಪಚಾರಿಕತೆಯಿಂದ ಕೂಡಿದ ಆರಂಭಿಕ ಹಂತ ಗುಂಪಿನ ಸಾಮಾಜಿಕ ಸನ್ನಿವೇಶವಾಗಿದೆ.

*ಅನು: ಕು|| ಅಪರ್ಣ*

---

## ಅಡಿಟಿಪ್ಪಣಿ

1. ಎ.ಕ. 5 (ಪು.ಮು) ಕೃಷ್ಣರಾಜನಗರ 92, (1976)